ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

Online ಶಿಕ್ಷಣ ಮತ್ತು RTE ಶಿಕ್ಷಣದ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

60 (49) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಇತ್ತೀಚೆಗೆ ಕರೋನ ವೈರಾಣು ರೋಗದ ಹಿನ್ನೆಲೆಯಲ್ಲಿ ರಾಜ್ಯದಾದ್ಯಂತ ಖಾಸಗಿ ಶಾಲೆಗಳಲ್ಲಿ ಅಂತರ್ಜಾಲ ಮುಖಾಂತರ ಶಿಕ್ಷಣ ನೀಡುತ್ತಿರುವುದು ಸರಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ಅಂತರ್ಜಾಲ ಮುಖಾಂತರ ಶಿಕ್ಷಣ ನೀಡುತ್ತಿರುವ ಹಲವು ಖಾಸಗಿ ಶಾಲೆಗಳಲ್ಲಿ ಪ್ರಸಕ್ತ ವರ್ಷದ ಶೈಕ್ಷಣಿಕ ಶುಲ್ಕ ಪಾವತಿ ಮಾಡುವಂತೆ ಮಕ್ಕಳ ಪೋಷಕರಿಗೆ ಒತ್ತಾಯಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು; (ಮಾಹಿತಿ ನೀಡುವುದು)

(ಇ) ಕಳೆದ 10 ವರ್ಷಗಳಿಂದ ಶಿಕ್ಷಣ ಹಕ್ಕು ಕಾಯ್ದೆ (RTE)ಯಡಿಯಲ್ಲಿ ಸರ್ಕಾರದಿಂದ ಖಾಸಗಿ ಶಿಕ್ಷಣ ಶಾಲೆಗಳಿಗೆ ಕೊಡಬೇಕಾಗಿರುವ ಮೊತ್ತವೆಷ್ಟು; (ವರ್ಷವಾರು, ಜಿಲ್ಲೆವಾರು ವಿವರ ನೀಡುವುದು)

(ಈ) ಸರ್ಕಾರದ ಬೊಕ್ಕಸದಿಂದ ಖಾಸಗಿ ಶಾಲೆಗಳಿಗೆ ಪ್ರತಿ ವರ್ಷ ನೀಡುತ್ತಿರುವ ಶುಲ್ಕದ ಮೊತ್ತವನ್ನು ಕಡಿಮೆ ಮಾಡಲು ಪೂರಕ ಕ್ರಮಗಳನ್ನು ಕೈಗೊಳ್ಳುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ? (ವಿವರ ನೀಡುವುದು)